**Appointing Authority : Government**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | RAVEENDRA NAIKA T<br>ASST STATISTICAL OFFICER<br>DIRECTORATE OF MUNICIPAL<br>ADMINISTRATION 10-FLOOR V V TOWER<br>DR AMBEDKAR VEEDI BANGALORE-560001 | 22/12/70 | SC | MSC (STATI STICS) MPHIL | 61.70 |

**K. ANIL KUMAR**
Secretary I/C
Karnataka Public Service Commission.

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**
**NOTIFICATION**
**No. PSC 74 RTB 2006, Dated : 21st April, 2007**

In pursuance of this Office Notification No. PSC 01 RTB 4/2006 dated:27/11/2006,the Provisional Select List of candidates for 1(Backlog)post of LECTURER IN BOTANY IN FIRST GRADE COLLEGES in the Department of COLLEGIATE EDUCATION prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment)Rules,2001,was published vide Notification of even number dated 13/03/2007 inviting objections,if any,from candidates within 15 days of its publication.The objections received have been considered and the final selection list is hereby published for information of the candidates.

**Appointing Authority : Government**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | RATHNA KUMARI B M<br>DNO.422 III MAIN R R LAYOUT<br>NAGADEVANAHALLI<br>BANGALORE-560056 | 05/04/77 | SC | MSC (APP.BOT) 2000 SLET | 74.60 |
| | **ADDITIONAL LIST** | | | | |
| 1 | LALITHA V<br># 110 4TH CROSS TELECOM LAYOUT<br>BOGADI II STAGE, MYSORE-570026 | 16/07/76 | SC | MSC (BOTANY) 1999 NET | 72.60 |

**K. ANIL KUMAR**
Secretary I/C
Karnataka Public Service Commission.

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**
**NOTIFICATION**
**No. PSC 75 RTB 2006, Dated : 22nd May, 2007**

In pursuance of this Office Notification No. PSC 01 RTB 4/2006 dated:27/11/2006,the Revised Provisional Select List of candidates for recruitment to 1(Backlog) post of LECTURER IN MICRO-BIOLOGY IN FIRST GRADE COLLEGES in the Department of COLLEGIATE EDUCATION prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment)Rules,2001,was published vide Notification of even number dated 21/04/2007 inviting objections,if any,from candidates within 15 days ofits publication.No objections have been received and the final selection list is hereby published for information of the candidates

**Appointing Authority : Government**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | MOHANA D C<br>S/O CHIKKAIAH<br>DEVIHALLI MALALI POST<br>SHANTHIGRAMA HOBLI HASSAN<br>TALUK & DIST-573216 | 05/11/74 | SC | MSC(MICRO BIOLOGY) NET | 71.40 |
| | **ADDITIONAL LIST** | | | | |
| 1 | GEETHA H A<br>C/O M ANJANAPPA<br># 7614 OLD NO.1013 3-CROSS<br>SUBHASHNAGAR<br>NELAMANGALA BANGALORE<br>RURAL DIST-562123 | 14/06/71 | SC | MSC(MICRO BIOLOGY) MPHIL | 66.80 |

**K. ANIL KUMAR**
Secretary I/C
Karnataka Public Service Commission.

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**
**NOTIFICATION**
**No. PSC 76 RTB 2006, Dated : 21st April, 2007**

In pursuance of this Office Notification No. PSC 01 RTB 4/2006 dated:27/11/2006,the Provisional Select List of candidates for 1(Backlog) post of LECTURER IN ZOOLOGY IN FIRST GRADE COLLEGES in the Department of COLLEGIATE EDUCATION prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment)Rules, 2001, was published vide Notification of even number dated 13/03/2007 inviting objections, if any,from candidates within 15 days of its publication.The objections received have been considered and the final selection list is hereby published for information of the candidates.

**Appointing Authority : Government**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | DHAKSHAYANI P N<br># 2 MC COTTAGE 17-CROSS 22-MAIN<br>SHAMANNA GARDEN JP NAGAR<br>5-PHASE, BANGALORE-560078 | 20/09/75 | SC | MSC(ZOOLOGY) 1998 SLET | 76.00 |
| | **ADDITIONAL LIST** | | | | |
| 1 | VISHALAKSHI Y<br># 528 SOMESHWARA BLOCK<br>BHAJANA MANDIRA STREET<br>OORIGAUMPET, KOLAR-563121 | 08/04/75 | SC | MSC(ZOOLOGY) 2001 SLET | 71.60 |

**K. ANIL KUMAR**
Secretary I/C
Karnataka Public Service Commission.

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**
**NOTIFICATION**
**No. PSC 77 RTB 2006, Dated : 29th March, 2007**

In pursuance of this Office Notification No. PSC 01 RTB 4/2006 dated:27/11/2006,the Provisional Select List of candidates for 02 (Backlog) posts of LECTURER IN JOURNALISM IN FIRST GRADE COLLEGES in the Department of COLLEGIATE EDUCATION prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes)(Special Recruitment)Rules,2001,was published vide Notification of even number dated 23/02/2007 inviting objections,if any,from candidates within 15 days of its publication. The objections received have been considered and the final selection list is hereby published for information of the candidates.

**Appointing Authority : GOVERNMENT**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | MAHESHA D<br>S/O DODDARANGAIAH<br>DODDANARAVANGALA AT POST<br>TUMKUR TQ AND DIST-572107 | 20/07/73 | SC | MS(COMMUNI CATION) SLET | 69.75 |
| 2 | VIJAYA K<br>C/O MANJUNATH<br>NO.3102 10TH CROSS<br>GAYATHRI NAGAR BANGALORE-560021 | 01/06/72 | ST | MA(C & J) SLET | 55.52 |
| | **ADDITIONAL LIST** | | | | |
| 1 | SANJAYAKUMAR MALAGATTI<br>C/O M R RATAN<br>H # 60 SANMAN COLONY 2-CROSS<br>BEHIND NEW BUS STAND HUBLI-580024 | 01/01/71 | SC | MA(MC & J) SLET PHD | 63.20 |

**K. ANIL KUMAR**
Secretary I/C
Karnataka Public Service Commission.

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**
**NOTIFICATION**
**No. PSC 78 RTB 2006, Dated : 19th June, 2007**

In pursuance of this Office Notification No. PSC 01 RTB 4/2006 dated:27/11/2006,the revised Provisional Select List of candidates for 2(Backlog) posts of LECTURER IN HOME SCIENCE IN FIRST GRADE COLLEGES in the Department of COLLEGIATE EDUCATION prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment)Rules,2001,was published vide Notification of even number dated 11/04/2007 inviting objections,if any,from candidates within 15 days of its publication. No objections have been received and the final selection list is hereby published for information of the candidates.

**Appointing Authority : Government**
**Name of the Department : COLLEGIATE EDUCATION**

| Sl. No. | Name of the Candidate | D_O_B | Resvn. | Qualification | Marks |
|---|---|---|---|---|---|
| | **MAIN LIST** | | | | |
| 1 | VIDHYA R<br>NO.618 2 H CROSS II BLOCK<br>KALYAN NAGAR, BANGALORE-560043 | 16/07/77 | SC | MSC (H S) NET | 75.70 |
| | **ADDITIONAL LIST** | | | | |
| 1 | SHIVA SHANKAR M<br>NOSENOOR INDALAWADI POST<br>ANEKAL TQ, BANGALORE DIST-562106 | 05/06/69 | SC | MSC (F & N) NET | 75.70 |

**K. ANIL KUMAR**
PR-508
Secretary I/C
Karnataka Public Service Commission.

ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್ (ಕರ್ನಾಟಕ ಮೃಗಾಲಯ ಪ್ರಾಧಿಕಾರದ ಒಂದು ಅಂಗ ಸಂಸ್ಥೆ)
ಕಾರ್ಯನಿರ್ವಾಹಕ ನಿರ್ದೇಶಕರು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು–83

**ಸಂಕ್ಷಿಪ್ತ ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಎ2/ ಬಬಪಾ/ ಫೀಡ್/ ಸಿಆರ್–1/ 2007–2008, ದಿನಾಂಕ:27ನೇ ಆಗಸ್ಟ್, 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2007–2008ನೇ ಸಾಲಿನಲ್ಲಿ ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿರುವ ವನ್ಯಪ್ರಾಣಿಗಳಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ದನದ ಮಾಂಸ ಸರಬರಾಜು ಮಾಡುವ ಬಗ್ಗೆ ಮರು ಟೆಂಡರನ್ನು ಕರೆಯಲಾಗಿದೆ. ಟೆಂಡರ್‌ದಾರರು ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿ ನೊಂದಾಯಿಸಿದ ಗುತ್ತಿಗೆದಾರರಾಗಿರಬೇಕು. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಆರೋಗ್ಯ ಇಲಾಖೆ ಇವರಿಂದ ಟ್ರೇಡ್ ಲೈಸೆನ್ಸ್ ಸರ್ಟಿಫಿಕೇಟ್ ಹೊಂದಿರುವ ಮತ್ತು ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ ಸಂಸ್ಥೆಯವರಿಂದ ದನದ ಮಾಂಸ ಸರಬರಾಜು ಬಗ್ಗೆ ದೃಢೀಕರಣ ಪತ್ರವನ್ನು ಹೊಂದಿರುವ ಗುತ್ತಿಗೆದಾರರು ಮಾತ್ರ ಅರ್ಹರಿರುತ್ತಾರೆ. ಮೊಹರು ಮಾಡಿದ ಟೆಂಡರನ್ನು ದಿನಾಂಕ:27.09.2007ರಂದು ಈ ಕಛೇರಿಯಲ್ಲಿ ಮಧ್ಯಾಹ್ನ 3.00 ಗಂಟೆ ಒಳಗೆ ಟೆಂಡರು ಸಲ್ಲಿಸುವುದು ಮತ್ತು ಅದೇ ದಿನ ಸಂಜೆ 4.30 ಗಂಟೆಗೆ ಟೆಂಡರನ್ನು ತೆರೆಯಲಾಗುವುದು.

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿಗೆ ಇಡಲಾದ ಆಹಾರ ಪದಾರ್ಥಗಳ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಸಲ್ಲಿಸಬೇಕಾದ ಇ.ಎಂ.ಡಿ. ಹಣ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಸಫಾರಿಗೆ ದನದ ಮಾಂಸ ಸರಬರಾಜು ಮಾಡುವುದು | 68.50 | 6.85 |
| 2 | ಮೃಗಾಲಯಕ್ಕೆ ದನದ ಮಾಂಸ ಸರಬರಾಜು ಮಾಡುವುದು | 7.67 | 0.77 |
| 3 | ಪುನರ್ವಸತಿ ಕೇಂದ್ರಕ್ಕೆ ದನದ ಮಾಂಸ ಸರಬರಾಜು ಮಾಡುವುದು | 71.46 | 7.15 |
| 4 | ಬಿ.ಎಫ್.ಎಫ್. ಹುಲಿಗಳಿಗೆ ದನದ ಮಾಂಸ ಸರಬರಾಜು ಮಾಡುವುದು | 4.85 | 0.49 |

**ಷರತ್ತುಗಳು:**

1) ಗುತ್ತಿಗೆದಾರರು ಪ್ರತಿಯೊಂದು ಯೂನಿಟ್‌ಗೆ ರೂ.563/– (ತೆರಿಗೆಗಳು ಸೇರಿ) ಹಣ ಪಾವತಿಸಿ ಪ್ರತ್ಯೇಕ ಟೆಂಡರ್ ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ:24.09.2007 ರಿಂದ 26.09.2007 ರವರೆಗೆ ಪಡೆಯಬಹುದು.

2) ಕರ್ನಾಟಕ ಸರ್ಕಾರದಿಂದ ಅನುಮೋದಿಸಲ್ಪಟ್ಟ ಕಸಾಯಿಖಾನೆಯ ಲೈಸೆನ್ಸ್ ಹೊಂದಿರುವ ಟೆಂಡರುದಾರರು ಮೇಲೆ ತಿಳಿಸಿದ ಲೈಸೆನ್ಸ್‌ಗಳನ್ನು ಈ ಕಛೇರಿಗೆ ನೀಡಿದ್ದಲ್ಲಿ ಮಾತ್ರ ಟೆಂಡರ್ ಫಾರಂನ್ನು ಕೊಡಲಾಗುವುದು.

3) ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್,
ಬೆಂಗಳೂರು–83.

ಪಿ.ಡಿ.88

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಅರಣ್ಯ ಸಂಚಾರಿ ದಳ, ಹಾಸನ

**ಟೆಂಡರು ಮತ್ತು ಹರಾಜು ಪ್ರಕಟಣೆ**

**ಸಂಖ್ಯೆ: ಹಾಸನ. ಅಸಂದಳ. ಅಮೊ: ವಾಹನ ಹರಾಜು:1/ 2007–08, ದಿನಾಂಕ:9ನೇ ಆಗಸ್ಟ್, 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ದಿನಾಂಕ:06.12.2006 ರಂದು ವಾಹನಗಳ ಬಹಿರಂಗ ಹರಾಜಿನಲ್ಲಿ ಹರಾಜು ಮಾಡಿದ್ದ ವಾಹನ ಮಾರುತಿ ಎಸ್ಟೀಮ್–ಎಪಿ–11–ಇ–1112ರ ಹರಾಜು ವಿಲೇವಾರಿ ಆದೇಶ ರದ್ದುಪಡಿಸಿ ಪುನಃ ದಿನಾಂಕ:20.09.2007 ರಂದು ಬೆಳಿಗ್ಗೆ 11–00 ಗಂಟೆಗೆ ಹಾಸನ ಗಂಧದ ಕೋಠಿ ಆವರಣದಲ್ಲಿ ಈ ಕೆಳಗೆ ಸಹಿ ಮಾಡಿರುವ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳವರಿಂದ ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್ ಮತ್ತು ಬಹಿರಂಗ ಹರಾಜು ಮಾಡಲಾಗುವುದು.

## ಷರತ್ತುಗಳು

1) ಹರಾಜಿನಲ್ಲಿ ಭಾಗವಹಿಸುವುದಕ್ಕೆ ಮುಂಚಿತವಾಗಿ ಮೇಲ್ಕಂಡ ಸ್ಥಳದಲ್ಲಿರುವ ವಾಹನಗಳನ್ನು ಪರಿಶೀಲಿಸಬಹುದು.

2) ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಬಾಕಿಯಾದವರು ಅಥವಾ ವಯಸ್ಕರಲ್ಲದವರು ಟೆಂಡರ್ ಅಥವಾ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.

3) ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ವಾಹನಕ್ಕೆ ರೂ.10,000–00 (ಹತ್ತು ಸಾವಿರ ರೂಪಾಯಿಗಳು ಮಾತ್ರ) ಠೇವಣಿಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ ಇವರ ಹೆಸರಿಗೆ ತೆಗೆದುಕೊಂಡು ಡಿಮ್ಯಾಂಡ್ ಡ್ರಾಫ್ಟ್‌ನ್ನು ಟೆಂಡರ್ ಜೊತೆ ಲಗತ್ತಿಸಬೇಕು. ನಗದು ಹಣವನ್ನು ಸ್ವೀಕರಿಸುವುದಿಲ್ಲ.

4) ಬಹಿರಂಗ ಹರಾಜು ಪ್ರಾರಂಭವಾಗುವುದಕ್ಕೆ ಮೊದಲು ಟೆಂಡರ್ ಸ್ವೀಕರಿಸಲಾಗುವುದು ಮತ್ತು ಬಹಿರಂಗ ಹರಾಜಿನ ನಂತರ ಟೆಂಡರುಗಳನ್ನು ತೆಗೆಯಲಾಗುವುದು.

5) ಟೆಂಡರನ್ನು ನಿಗದಿತ ಟೆಂಡರ್ ಪತ್ರದಲ್ಲಿಯೇ ಸಲ್ಲಿಸಬೇಕು, ಟೆಂಡರ್ ನಮೂನೆಯನ್ನು ರೂ.250–00 (ತೆರಿಗೆಗಳು ಸೇರಿ) ನಗದು ಕೊಟ್ಟು ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ನಮೂನೆ ಪತ್ರವನ್ನು ದಿನಾಂಕ:20.09.2007 ರಂದು ಬೆಳಿಗ್ಗೆ 11–00 ಗಂಟೆವರೆಗೆ ನೀಡಲಾಗುವುದು. ಪಡೆದ ನಿಗದಿತ ನಮೂನೆ ಪತ್ರವನ್ನು ವರ್ಗಾಯಿಸುವುದಿಲ್ಲ.

6) ಟೆಂಡರ್ ಅಥವಾ ಹರಾಜಿನಲ್ಲಿ ಯಶಸ್ವಿಯಾದವರು ಸ್ವೀಕೃತಿ ಪತ್ರ ತಮಗೆ ತಲುಪಿದ (ಹತ್ತು) ದಿನಗಳೊಳಗೆ ಪೂರ್ಣ ಹಣ ಪಾವತಿಸಬೇಕು. ಇಲ್ಲದಿದ್ದಲ್ಲಿ ಶೇ.18 (18%) ರಷ್ಟು ಬಡ್ಡಿಯನ್ನು ವಸೂಲಿ ಮಾಡಲಾಗುವುದು.

7) ಟೆಂಡರ್ ಅಥವಾ ಹರಾಜಿನ ದಿನವು ಸರ್ಕಾರಿ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನದಂದು ಟೆಂಡರ್ ಯಾ ಹರಾಜನ್ನು ನಡೆಸಲಾಗುವುದು.

8) ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಅಥವಾ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಜಾಗೃತ) ಬೆಂಗಳೂರು ಇವರು ಟೆಂಡರ್: ಹರಾಜಿನ ಸವಾಲನ್ನು ಯಾವ ಕಾರಣವೂ ನಮೂದಿಸದೇ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹೊಂದಿರುತ್ತಾರೆ.

9) ಯಶಸ್ವಿಯಾದ ಟೆಂಡರ್‌ದಾರರು ಅಥವಾ ಬಿಡ್ಡುದಾರರು ಸವಾಲಿನ ಮೊಬಲಗಿನ ಮೇಲೆ ಶೇ.12.50 (12.50%) ವ್ಯಾಟ್ ತೆರಿಗೆಯನ್ನು (ಅಥವಾ ಹರಾಜು ದಿನದಂದು ವಿಧಿಸಬಹುದಾದ ವ್ಯಾಟ್ ತೆರಿಗೆಯನ್ನು) ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಆದಾಯ ತೆರಿಗೆಯನ್ನು ಪಾವತಿಸಬೇಕು.

10) ಬಿಡ್ಡು ಮಾಡಿದ ಕೂಡಲೇ ಅತೀ ಹೆಚ್ಚಿನ ಕ್ರಯದಾರರು ಅಥವಾ ಅತೀ ಹೆಚ್ಚಿನ ಟೆಂಡರುದಾರರು ಕ್ರಯದ ಅರ್ಧ ಭಾಗ ಹಣ ಮತ್ತು ಕ್ರಯದ ಮೌಲ್ಯದ ಮೇಲೆ ವಿಧಿಸುವ ಎಲ್ಲಾ ತೆರಿಗೆಗಳನ್ನು ಮಾರಾಟದ ದಿನವೇ ಸಲ್ಲಿಸಬೇಕು. ಪಾವತಿ ಮಾಡದೇ ಇದ್ದ ಪಕ್ಷದಲ್ಲಿ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ವಾಹನಗಳನ್ನು ಮೂಲ ಕ್ರಯದಾರರ ಖರ್ಚು ಹಾಗೂ ಜವಾಬ್ದಾರಿಯಲ್ಲಿ ಪುನರ್ ಮಾರಾಟ ಮಾಡಲಾಗುವುದು.

11) ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಈ ಕಛೇರಿಯಲ್ಲಿ ತಿಳಿಯಬಹುದು.

12) ಕ್ರಯದಾರರು ವಾಹನವನ್ನು ತಮ್ಮ ಜವಾಬ್ದಾರಿ ಮತ್ತು ತಮ್ಮ ಖರ್ಚಿನಲ್ಲಿಯೇ ತಮ್ಮ ಹೆಸರಿಗೆ ನೋಂದಾಯಿಸಲು/ ಮಾರ್ಪಡಿಸಲು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ದಾಖಲಾತಿಗಳನ್ನು ಪಡೆದು ವರ್ಗಾಯಿಸಿಕೊಳ್ಳಲು ಕ್ರಮ ತೆಗೆದುಕೊಳ್ಳುವುದು. ಅದಕ್ಕೆ ಕ್ರಯದಾರರೇ ಜವಾಬ್ದಾರರಾಗಿರುತ್ತಾರೆ.

13) ಮೇಲ್ಕಂಡ ಟೆಂಡರ್ ಯಾ ಹರಾಜಿನ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಅಥವಾ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಜಾಗೃತ) ಬೆಂಗಳೂರುರವರ ತೀರ್ಮಾನವೇ ಅಂತಿಮವಾಗಿರುವುದು.

**ಸಿ.ಜಡ್. ಸೈಯದ್ ಗಫಾರ್**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಹಾಸನ.

ಪಿ.ಆರ್.510

## ಲೋಕೋಪಯೋಗಿ ಇಲಾಖೆ
## ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ, ರಾಯಚೂರು, ವಿಭಾಗ, ರಾಯಚೂರು
## ಟೆಂಡರ್ ಪ್ರಕಟಣೆ (ಎರಡು ಲಕೋಟೆ ಪದ್ಧತಿ)
## ಕ್ರ.ಸಂ./ ಲೋಇ/ ರಾವಿ/ ಕಿ.ಇಂ.–2/ ಟೆಂಡರ್/ 2007–2008

ಈ ಕೆಳಗೆ ನಮೂದಿಸಿದ ಕಾಮಗಾರಿಗೆ ಪಿ.ಡಬ್ಲ್ಯೂ.ಜಿ. 65 ಮತ್ತು 66 ಎನ್.ಐ.ಟಿ. ನಿಯಮಾವಳಿಯಂತೆ ನಿಗದಿತ ಶೆಡ್ಯೂಲ್‌ಗಳಲ್ಲಿ ದ್ವಿಪ್ರತಿಯಲ್ಲಿ ಐಟಂವಾರ್ ಎರಡು ಲಕೋಟೆ ಪದ್ಧತಿಯಲ್ಲಿ ಅಂದರೆ "ತಾಂತ್ರಿಕ ಬಿಡ್" ಮತ್ತು "ಆರ್ಥಿಕ ಬಿಡ್" ಟೆಂಡರನ್ನು ಕರ್ನಾಟಕ ಪಾರದರ್ಶಕ ನಿಯಮಾವಳಿ–2000ರ ಪ್ರಕಾರ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾಗಿರುವ ಮೊದಲನೇ ದರ್ಜೆ ಗುತ್ತಿಗೆದಾರರಿಂದ ಮೊಹರು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಭರ್ತಿಮಾಡಿದ ಟೆಂಡರುಗಳನ್ನು ಗುತ್ತಿಗೆದಾರರು ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ ರಾಯಚೂರು ವಿಭಾಗ, ರಾಯಚೂರು, ಇವರ ಕಛೇರಿಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸತಕ್ಕದ್ದು ತಾಂತ್ರಿಕ ಬಿಡ್‌ಗಳನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದಿರುವ ಗುತ್ತೇದಾರರಿಗೆ ತಿಳುವಳಿಕೆ ನೀಡಿ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆಕಸ್ಮಾತ್ ಈ ಕೆಳಗೆ ನಮೂದಿಸಿದ ದಿನಾಂಕವು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಿದಲ್ಲಿ ಮುಂದಿನ ಕಛೇರಿ ಕೆಲಸದ ದಿನಾಂಕವನ್ನು ಪರಿಗಣಿಸಬೇಕು.

ಅರ್ಜಿಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಡನೆ ಮೂಲ ನೊಂದಣಿ ಪ್ರಮಾಣ ಪತ್ರ ಪರಿಶೀಲನೆಗಾಗಿ ತರಬೇಕು. ಒಂದು ವೇಳೆ ನೊಂದಾಣಿ ಪ್ರಮಾಣ ಪತ್ರ ತರದೆ ಇದ್ದ ಪಕ್ಷದಲ್ಲಿ ಅರ್ಜಿಯನ್ನು ಸ್ವೀಕರಿಸುವುದಿಲ್ಲ. ಟೆಂಡರ್ ದಾಖಲೆಯ ಶುಲ್ಕವನ್ನು (ಹಿಂತಿರುಗಿಸಲಾಗುವುದಿಲ್ಲ) ಕಾರ್ಯನಿರ್ವಾಹಕ ಇಂಜಿನೀಯರವರ ಹೆಸರಿನ ಮೇಲೆ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿಗದಿಪಡಿಸಿದ ದಿನಾಂಕದಂದು ಅಥವಾ ಪೂರ್ವದಲ್ಲಿಯೇ ಸಲ್ಲಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಮಂಜೂರಾದ ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್‌ಗೆ ಇಟ್ಟ ಹಣ (ರೂ.ಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ಟೆಂಡರ್ ಖರೀದಿಯ ಬೆಲೆ ತೆರಿಗೆಸಹಿತ (ರೂ.ಗಳಲ್ಲಿ | ಕಾಮಗಾರಿಯನ್ನು ಮುಗಿಸುವ ಕಾಲಾವಧಿ (ಮಳೆಗಾಲ ಸೇರಿ) | ಕರೆಯ ಸಂಖ್ಯೆ ಟೆಂಡರಿನ ವಿಧಾನ | ಗುತ್ತೇದಾರರ ದರ್ಜೆ |
|---|---|---|---|---|---|---|---|---|
| | **ಲೆಕ್ಕ ಶೀರ್ಷಿಕೆ 5054–(ಯೋಜನೆ) ಇತರೆ ರಸ್ತೆ ನಿರ್ಮಾಣ** | | | | | | | |
| 1. | ಮಾನ್ವಿ ತಾಲ್ಲೂಕಿನ ಹಿರೇಹಣಗಿ–ಹಿರೇಕೊಟ್ನೇಕಲ್ ರಸ್ತೆಯ (ಜಿ.ಮು.ರ) ಕಿ.ಮೀ.7.40 ರಿಂದ 12.50ರ ವರೆಗೆ ಸುಧಾರಣೆ ಮತ್ತು ಡಾಂಬರೀಕರಣ ಕಾಮಗಾರಿ. | 100–00 | 99,50,000–00 | 1,00,000–00 | 5,500–00 | ಒಂಭತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರು | ಒಂದನೇ ದರ್ಜೆ ಲೋ.ಇ. ಗುತ್ತಿಗೆದಾರರು. |
| 2. | ಮಾನ್ವಿ ತಾಲ್ಲೂಕಿನ ಅತ್ತನೂರು ಕ್ರಾಸ್ ದಿಂದ ಮಟಮಾರಿ ರೈಲ್ವೆ ಸ್ಟೇಷನ್‌ವರೆಗೆ ರಸ್ತೆ (ಜಿ.ಮು.ರ) ಕಿ.ಮೀ. 17.10 ರಿಂದ 25.00ರ ವರೆಗೆ ಸುಧಾರಣೆ ಮತ್ತು ಡಾಂಬರೀಕರಣ ಕಾಮಗಾರಿ. | 80–00 | 80,00,000–00 | 80,000–00 | 5,500–00 | ಒಂಭತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರು | ಒಂದನೇ ದರ್ಜೆ ಲೋ.ಇ. ಗುತ್ತಿಗೆದಾರರು. |
| 3. | ಮಾನ್ವಿ ತಾಲ್ಲೂಕಿನ ಅತ್ತನೂರು ಕ್ರಾಸ್ ದಿಂದ ಮಟಮಾರಿ ರೈಲ್ವೆ ಸ್ಟೇಷನ್‌ವರೆಗೆ ರಸ್ತೆ (ಜಿ.ಮು.ರ.) ಕಿ.ಮೀ. 25.00 ರಿಂದ 33.00 ರ ವರೆಗೆ ಸುಧಾರಣೆ ಮತ್ತು ಡಾಂಬರೀಕರಣ ಕಾಮಗಾರಿ. | 80–00 | 80,00,000–00 | 80,000–00 | 5,500–00 | ಒಂಭತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರು | ಒಂದನೇ ದರ್ಜೆ ಲೋ.ಇ. ಗುತ್ತಿಗೆದಾರರು. |
| 4. | ಮಾನ್ವಿ ತಾಲ್ಲೂಕಿನ ಮಾನವಿ– ಗವಿಗಟ್ ರಸ್ತೆಯ (ಜಿ.ಮು.ರ.) ಕಿ.ಮೀ.0.00 ರಿಂದ 12.00ರ ವರೆಗೆ ಸುಧಾರಣೆ ಮತ್ತು ಡಾಂಬರೀಕರಣ ಕಾಮಗಾರಿ. | 85–00 | 85,00,000–00 | 85,000–00 | 5,500–00 | ಒಂಭತ್ತು ತಿಂಗಳು (ಮಳೆಗಾಲ ಸೇರಿ) | ಮೊದಲನೇ ಕರೆ ಮತ್ತು ಐಟಂವಾರು | ಒಂದನೇ ದರ್ಜೆ ಲೋ.ಇ. ಗುತ್ತಿಗೆ ದಾರರು. |

ಗುತ್ತಿಗೆದಾರರು ಎರಡು ಲಕೋಟೆ ಪದ್ಧತಿಯಂತೆ ಟೆಂಡರನ್ನು ಈ ಕೆಳಗಿನ ವಿವರಗಳೊಂದಿಗೆ ಸಲ್ಲಿಸತಕ್ಕದ್ದು.

**ಒಂದನೇ ಲಕೋಟೆಯಲ್ಲಿ ಸಲ್ಲಿಸಬೇಕಾದ ವಿವರಗಳು. (ಟೆಕ್ನಿಕಲ್ ಬಿಡ್)**

1. ದೃಢೀಕೃತ ಕರ್ನಾಟಕ ಸರ್ಕಾರದ ಮೊದಲನೇ ದರ್ಜೆಯ ಗುತ್ತಿಗೆದಾರರ ನೊಂದಣಿಪತ್ರ. 2005-2010ನೇ ಬ್ಲಾಕ್ ಅವಧಿಗೆ ನವೀಕೃತಗೊಳಿಸತಕ್ಕದ್ದು.
2. ದೃಢೀಕೃತ ಗುತ್ತಿಗೆದಾರರ ಅನುಭವ ಪ್ರಮಾಣ ಪತ್ರ.
3. ಮುಂಗಡ ಠೇವಣಿ ಹಣದ ಮೊತ್ತ.
4. ದೃಢೀಕೃತ ಯಂತ್ರಗಳ ವೊನರ್‌ಶಿಪ್ ಅಥವಾ ಲೀಸ್ ದಾಖಲೆಗಳು.

**ಎರಡನೇ ಲಕೋಟೆಯಲ್ಲಿ ಸಲ್ಲಿಸಬೇಕಾದ ವಿವರಗಳು. (ಫೈನಾನ್ಸಿಯಲ್ ಬಿಡ್)**

ಗುತ್ತಿಗೆದಾರರ ದರ ನಮೂದಿಸಿದ ಟೆಂಡರು ಪುಸ್ತಕಗಳು (ಶೆಡ್ಯೂಲ್-ಬಿ) ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

ಪ್ರತ್ಯೇಕ ಲಕೋಟೆ ಮೇಲೆ "ಟೆಕ್ನಿಕಲ್ ಬಿಡ್", "ಫೈನಾನ್ಸಿಯಲ್ ಬಿಡ್" ಕಾಮಗಾರಿಯ ಹೆಸರು ಗುತ್ತಿಗೆದಾರರ ಹೆಸರು ಹಾಗೂ ಅಂಚೆ ವಿಳಾಸ ನಮೂದಿಸತಕ್ಕದ್ದು.

**ಷರತ್ತುಗಳು:**

1. ರಸ್ತೆ ಕಾಮಗಾರಿಯನ್ನು ಹೆಚ್.ಎಂ.ಪಿ. ಪೇವರಗಳನ್ನು ಉಪಯೋಗಿಸಿ ನಿರ್ವಹಿಸುವುದು.
2. ಟೆಂಡರ್ ಸಲ್ಲಿಸಲು ಇಚ್ಛಿಸುವ ಅರ್ಜಿದಾರರು ಅನುಭವ ಪ್ರಮಾಣ ಪತ್ರವನ್ನು ತಪ್ಪದೇ ಸಲ್ಲಿಸಬೇಕು ಸದರಿ ಪ್ರಮಾಣ ಪತ್ರ ಟೆಂಡರಿಗೆ ಇಟ್ಟ ಹಣ ಮೊತ್ತದ ಶೇಕಡಾ ಮೂವತ್ತು (30) ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ಕಳೆದ ಐದು ವರ್ಷದ ಅಂದರೆ 2002-2007 ಅವಧಿಯಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ನಿರ್ವಹಿಸತಕ್ಕದ್ದು. (ಹಿಂದಿನ ವರ್ಷಗಳಲ್ಲಿ ನಿರ್ವಹಿಸಿದ ಕಾಮಗಾರಿಗಳಿಗೆ ಪ್ರತಿ ವರ್ಷ ಶೇಕಡಾ ಹತ್ತು (10) ರಂತೆ ಕಂಪೌಂಡಿಂಗ್ ಹೆಚ್ಚುವರಿ ಪರಿಗಣಿಸಲಾಗುವುದು) ಪರ್ಯಾಯವಾಗಿ ಗುತ್ತೇದಾರರು ಪ್ರಸ್ತುತ ಸಾಲಿನಲ್ಲಿ ಕೈಗೊಂಡ ಚಾಲ್ತಿಯಲ್ಲಿರುವ ಕಾಮಗಾರಿಯ ಶೇಕಡಾ 30ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ನಿರ್ವಹಿಸಿದ ಬಗ್ಗೆ ಅನುಭವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜನೀಯರ್ ಅಧಿಕಾರಿಯಿಂದ ಪಡೆದು ಸಹ ಸಲ್ಲಿಸಬಹುದು.
3. ಯಂತ್ರಗಳ ವೊನರ್‌ಶಿಪ್ ಅಥವಾ ಲೀಸ್ ದಾಖಲೆಗಳ ವಿವರಗಳು ಕೆಳಗೆ ನಮೂದಿಸಿದಂತೆ ಸಲ್ಲಿಸತಕ್ಕದ್ದು.

| ಕ್ರ.ಸಂ. | ಯಂತ್ರಗಳು | ಪರಿಗಣಿಸಬೇಕಾದ ಸಂ. | ಸಲ್ಲಿಸಬೇಕಾದ ದಾಖಲೆಗಳು |
|---|---|---|---|
| 1. | ಟಿಪ್ಪರ್‌ಗಳು | ನಾಲ್ಕು (4) ನಂ. | ಆರ್.ಟಿ.ಓ. ಇವರಿಂದ ಪಡೆದಿರುವ ನೊಂದಾಣಿ ಪತ್ರ ಮತ್ತು ಈಗಿನ ವರೆಗೆ ವಿಮಾ. |
| 2. | ಸ್ಟ್ಯಾಟಿಕ್ ರೋಡ್ ರೂಲರ್ | ಎರಡು (2) ನಂ. | ಮಾರಾಟ ಇನ್‌ವೈಸ್: ಬಿಲ್ಲು ಅಥವಾ ನೊಂದಾಯಿತ ಸೇಲ್ ಡೀಡ್ (ಮೂಲ ಇನ್‌ವೈಸ್ ಬಿಲ್ಲು ಜೊತೆಗೆ) |
| 3. | ವಾಹನಕ್ಕೆ ಅಂಟಿಸಿರುವ ಬಿಟುಮಿನಸ್ ಮೆಕಾನಿಕಲ್ ಸ್ಪ್ರೇಯರ್ | ಒಂದು (1) ನಂ. | ಮಾರಾಟ ಇನ್‌ವೈಸ್: ಬಿಲ್ಲು ಅಥವಾ ನೊಂದಾಯಿತ ಸೇಲ್ ಡೀಡ್ (ಮೂಲ ಇನ್‌ವೈಸ್ ಬಿಲ್ಲು ಜೊತೆಗೆ) |

4. ಟೆಂಡರ್ ಜೊತೆಗೆ ಲಗತ್ತಿಸಿದ ಎಲ್ಲಾ ಪ್ರಮಾಣ ಪತ್ರಗಳನ್ನು ಪತ್ರಾಂಕಿತ ಅಧಿಕಾರಿ/ ನೋಟರಿಯವರಿಂದ ನೋಟರಿ ಮುದ್ರೆಯೊಂದಿಗೆ ದೃಢೀಕರಿಸಿ ಸಲ್ಲಿಸತಕ್ಕದ್ದು, ಮೂಲ ಪ್ರಮಾಣ ಪತ್ರಗಳನ್ನು ಬೇಕೆಂದಾಗ ಪರಿಶೀಲನೆಗೆ ಒದಗಿಸತಕ್ಕದ್ದು.
5. ಮುಂಗಡ ಠೇವಣಿ ಹಣ ಮೊತ್ತವನ್ನು ಕಾರ್ಯನಿರ್ವಾಹಕ ಇಂಜನೀಯರರ ಹೆಸರಿನಲ್ಲಿ ತೆಗೆಸಿದ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಮಾಡಿದ ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪಾಜಿಟ್, ಡಿ.ಡಿ., ಪೇ ಆರ್ಡರ್, ಬ್ಯಾಂಕರ್ಸ್, ಚೆಕ್, ಡಿ.ಡಿ. ಅಂಚೆ ಕಛೇರಿಯಿಂದ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ, ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು.
6. ಕಾಮಗಾರಿಗೆ ಬೇಕಾಗಿರುವ ಐ.ಆರ್.ಸಿ. ಮತ್ತು ಐ.ಎಸ್.ಐ. ಮಾರ್ಕ್ ಹೊಂದಿರುವ ಎಲ್ಲಾ ಸಾಮಗ್ರಿಗಳನ್ನು ಅಂದರೆ ಡಾಂಬರು, ಉಕ್ಕು, ಸಿಮೆಂಟ್, ಹ್ಯೂಮ್‌ಪೈಪ್ ಇತ್ಯಾದಿ ಗುತ್ತಿಗೆದಾರರು ತಾವೇ ಪೂರೈಸಿಕೊಳ್ಳಬೇಕು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ. ಹಾಗೂ ಗುಣನಿಯಂತ್ರಣ ಪರೀಕ್ಷೆಯ ಬೆಲೆಯನ್ನು ಗುತ್ತಿಗೆದಾರರು ತುಂಬಬೇಕಾಗುತ್ತದೆ.
7. ಯಾವುದೇ ಟೆಂಡರನ್ನು/ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಅಧಿಕಾರಿಗಳು ಹೊಂದಿರುತ್ತಾರೆ.
8. ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜನೀಯರರು, ಲೋಕೋಪಯೋಗಿ ಇಲಾಖೆ ರಾಯಚೂರು ವಿಭಾಗ, ರಾಯಚೂರು ಇವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ನಿಗದಿಪಡಿಸಿದ ದಿನಾಂಕವು ಈ ಕೆಳಗಿನಂತೆ ಇರುತ್ತದೆ.**

1. ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ ಕಛೇರಿ ವೇಳೆಯಲ್ಲಿ 03.09.2007
2. ಖಾಲಿ ಟೆಂಡರ್ ಶೆಡ್ಯೂಲ್‌ಗಳನ್ನು ನೀಡುವ ದಿನಾಂಕ ಕಛೇರಿ ವೇಳೆಯಲ್ಲಿ 10.09.2007
3. ಭರ್ತಿ ಮತ್ತು ಮೊಹರು ಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ (ಸಾಯಂಕಾಲ 4.00 ಗಂಟೆವರೆಗೆ) 12.09.2007
4. ಟೆಂಡರ್‌ಗಳನ್ನು ತೆರೆಯುವ ದಿನಾಂಕ ಸಾಧ್ಯವಿದ್ದಲ್ಲಿ
   (ಅ) ತಾಂತ್ರಿಕ ಬಿಡ್ (ಸಾಯಂಕಾಲ 5.00 ಗಂಟೆಗೆ) 12.09.2007
   (ಆ) ಆರ್ಥಿಕ ಬಿಡ್ ತಿಳುವಳಿಕೆ ನೀಡಿದ ದಿನಾಂಕದಂದು.

**ಹನಮಂತರೆಡ್ಡಿ ಡಿ. ಬೆಳ್ಳಿಗನೂರ್**

ಪಿ.ಆರ್.511 ಕಾರ್ಯನಿರ್ವಾಹಕ ಇಂಜನೀಯರ್,

ಲೋಕೋಪಯೋಗಿ ಇಲಾಖೆ, ರಾಯಚೂರು ವಿಭಾಗ.

## ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ

### ಅಲ್ಪಾವಧಿ ಟೆಂಡರು ಕಂ ಬಹಿರಂಗ ಹರಾಜು ಪ್ರಕಟಣೆ

**ನಂ. ಕಾಅ/ ಲೋ.ಇ./ ಶಿವಿಶಿ/ ಎಇ–2/ ಕಟ್ಟಡ/ ಹರಾಜು/ 2007–08/1591, ದಿನಾಂಕ:17ನೇ ಆಗಸ್ಟ್, 2007**

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಾದ ಸಹಾಯಕ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ಇಲಾಖೆ, ನಂ.1 ಉಪವಿಭಾಗ, ಶಿವಮೊಗ್ಗ ಇವರಿಂದ ನಡೆಯಲ್ಪಡುವ "ಶಿವಮೊಗ್ಗ ನಗರದಲ್ಲಿರುವ ಲೋಕೋಪಯೋಗಿ ಇಲಾಖೆ ಸಹಾಯಕ ಕಾರ್ಯಪಾಲಕ ಅಭಿಯಂತರವರ ನಾಮಾಂಕಿತ ವಸತಿಗೃಹ ಕಡವಿ ಹಾಕಿ ಸಮತಟ್ಟು ಮಾಡುವ ಕಾಮಗಾರಿಯ" ಟೆಂಡರ್–ಕಂ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವರು ದಿನಾಂಕ:30.08.2007, ಸಾಯಂಕಾಲ 5.30 ಗಂಟೆಯೊಳಗೆ ಠೇವಣಿ ಹಣ ರೂ.10,000/– (ರೂಪಾಯಿ ಹತ್ತು ಸಾವಿರ ಮಾತ್ರ) ಮುಂಗಡವಾಗಿ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಮಾಂಡ್ ಡ್ರಾಫ್ಟ್‌ನ್ನು ಹಾಗೂ ಟೆಂಡರ್ ಫಾರಂ ಬೆಲೆ ರೂ.300 + 12.50% ತೆರಿಗೆ ಬೆಲೆಯನ್ನು ಪಾವತಿಸಿ ಖಾಲಿ ಟೆಂಡರ್ ಫಾರಂನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು ಹಾಗೂ ಟೆಂಡರ್ ಫಾರಂ ಪಡೆಯದೇ ದಿನಾಂಕ:03.09.2007 ರಂದು ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರೂ ಕೂಡಾ ನೊಂದಣಿ ಶುಲ್ಕ ರೂ.300+ 12.50% ತೆರಿಗೆ ಹಾಗೂ ಮುಂಗಡ ಹಣ ರೂ.10,000/– ಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಮಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ದಿನಾಂಕ:03.09.2007ರ ಬೆಳಿಗ್ಗೆ 10–00 ರಿಂದ 12–00 ರೊಳಗೆ ನೀಡಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

ಹರಾಜು ದಿನಾಂಕ: 03.09.2007
ವೇಳೆ : ಮದ್ಯಾಹ್ನ 3–00 ಗಂಟೆ
ಸ್ಥಳ : ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ,
ನಂ.1ನೇ ಲೋ.ಇ. ಉಪವಿಭಾಗ ಆವರಣ, ಶಿವಮೊಗ್ಗ.

ಕಾರ್ಯಪಾಲಕ ಅಭಿಯಂತರು,
ಲೋಕೋಪಯೋಗಿ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ನಿಬಂಧನೆಗಳು ಮತ್ತು ಷರತ್ತುಗಳು:**

1. ಭರ್ತಿ ಮಾಡಿದ ಟೆಂಡರುಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ:31.08.2007 ರಂದು ಸಂಜೆ 4.00 ಗಂಟೆಯೊಳಗೆ ಸ್ವೀಕರಿಸಲಾಗುವುದು.
2. ಟೆಂಡರ್ ಫಾರಂ ಪಡೆಯದೇ ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ:03.09.2007 ರಂದು ಅಪರಾಹ್ನ 12–00 ಗಂಟೆ ಒಳಗೆ ಮುಂಗಡವಾಗಿ, ಇಡುಗಂಟು ಹಣ ರೂ.10,000–00 ಮತ್ತು ನೊಂದಣಿ ಶುಲ್ಕ ರೂ.300+12.50% ತೆರಿಗೆಯನ್ನು ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಮಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ನೀಡಬೇಕು. ನೊಂದಣಿ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
3. ಬಹಿರಂಗ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಸ್ವೀಕರಿಸಲಾದ ಟೆಂಡರನ್ನು ತೆರೆಯಲಾಗುವುದು. ಎರಡೂ ಪ್ರಕ್ರಿಯೆಯಲ್ಲಿನ ಅತೀ ಹೆಚ್ಚಿನ ಮೊತ್ತದ ಬಿಡ್ಡನ್ನು ಪರಿಗಣಿಸಲಾಗುವುದು. ಅತೀ ಹೆಚ್ಚಿನ ಮೊತ್ತದ ಬಿಡ್‌ದಾರರು ಸ್ಥಳದಲ್ಲೇ ಬಿಡ್ ಮೊತ್ತದ 1/3 ಭಾಗವನ್ನು + 12.50% ತೆರಿಗೆಯನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಪಾವತಿಸಬೇಕು. ಪಾವತಿಸಲು ವಿಫಲರಾದಲ್ಲಿ ಅವರ ಮುಂಗಡ ಹಣ ರೂ. 10,000–00 ವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ 2ನೇ ಅತೀ ಹೆಚ್ಚಿನ ಮೊತ್ತದ ಬಿಡ್‌ದಾರರಿಗೆ ಅವಕಾಶ ಮಾಡಿಕೊಡಲಾಗುವುದು.
4. ಬಿಡ್ ಅನುಮೋದನೆ ಆದ ನಂತರ ಬಾಕಿ 2/3 ಮೊತ್ತ + 12.50% ತೆರಿಗೆ ಹಣ ಪಾವತಿಸಿ ಕಾರ್ಯಾದೇಶ ಪಡೆದು 30 ದಿನದೊಳಗೆ ಕಟ್ಟಡದ ಉಪಯುಕ್ತ ಮತ್ತು ಅನುಪಯುಕ್ತ ಸಾಮಗ್ರಿಗಳನ್ನು ಸ್ಥಳಾಂತರಿಸಿ ತೆರವುಗೊಳಿಸಿ ನಿವೇಶನವನ್ನು ಸಮತಟ್ಟು ಮಾಡತಕ್ಕದ್ದು, ತಪ್ಪಿದಲ್ಲಿ ಮುಂಗಡ ಹಣ ಹಾಗೂ 1/3 ಬಿಡ್ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಕಾರ್ಯಾದೇಶ ಪಡೆದ 30 ದಿನಗಳೊಳಗಾಗಿ ಕಾಮಗಾರಿಯನ್ನು ಕರಾರು ಪ್ರಕಾರ ಎಲ್ಲಾವಿಧದಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅವಧಿ ಮುಗಿದ ನಂತರ ದಿನ ಒಂದಕ್ಕೆ ರೂ.200/– ರಂತೆ ದಂಡ ವಿಧಿಸಲಾಗುವುದು.
6. ಟೆಂಡರುದಾರರು ಬೆಲೆಯನ್ನು ಅಂಕೆಯಲ್ಲಿ ಮತ್ತು ಅಕ್ಷರದಲ್ಲಿಯೂ ಸ್ಪಷ್ಟವಾಗಿ ಬರೆಯತಕ್ಕದ್ದು.

7. ಟೆಂಡರ್ ಪ್ರಸ್ತಾವನೆಗೆ ಮೇಲಾಧಿಕಾರಿಗಳಿಂದ ಅನುಮೋದನೆ ಆದ ನಂತರ ಸದರಿ ವಿಷಯವನ್ನು ಪತ್ರಮುಖೇನ ಪ್ರತ್ಯೇಕವಾಗಿ ತಿಳಿಸಲಾಗುವುದು ಹಾಗೂ ಪತ್ರ ತಲುಪಿದ 7 ದಿನಗಳೊಳಗಾಗಿ ಬಾಕಿ ಹಣವನ್ನು ಪಾವತಿಸಬೇಕು.
8. ಕೆಡವಿದ ನಂತರ ಕಟ್ಟಡಕ್ಕಾಗಿ ಬಳಸಿರುವ ಎಲ್ಲಾ ಸಾಮಗ್ರಿಗಳನ್ನು ನಿಯೋಜಿಸಿದ ಅಧಿಕಾರಿಗಳಿಗೆ ತೋರಿಸಿ ತೆಗೆದುಕೊಂಡು ಹೋಗತಕ್ಕದ್ದು.
9. ಕಟ್ಟಡವನ್ನು ಕೆಡವುವಾಗ ನಿಧಿ ಹಣ ವಗೆರೆ ದೊರತಲ್ಲಿ ಸದರಿ ವಿಷಯವನ್ನು ಅಧಿಕಾರಿಗಳ ಗಮನಕ್ಕೆ ಕೂಡಲೇ ತರುವುದು.
10. ಟೆಂಡರ್ ಕಂ ಹರಾಜಿನಲ್ಲಿ ಅಯಶಸ್ವಿಯಾದ ಬಿಡ್‌ದಾರರಿಗೆ / ಟೆಂಡರ್‌ದಾರರಿಗೆ ಮುಂಗಡ ಹಣವನ್ನು ಹಿಂದಿರುಗಿಸಲಾಗುವುದು, ನೊಂದಣಿ ಶುಲ್ಕ ಅಥವಾ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸಲಾಗುವುದಿಲ್ಲ.
11. ಅಂಗೀಕೃತ ಬಿಡ್‌ದಾರರು/ ಟೆಂಡರ್‌ದಾರರು, ಬಿಡ್ ಮೊತ್ತ/ ಟೆಂಡರ್ ಮೊತ್ತದ ಮೇಲೆ ನಿಯಮದ ಪ್ರಕಾರ ವಿಧಿಸುವ ತೆರಿಗೆ (ವ್ಯಾಟ್) ಯನ್ನು ಭರಿಸಬೇಕು.
12. ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣ ನೀಡದೇ ಅಂಗೀಕರಿಸುವ ಹಾಗೂ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿದೆ.
13. ಹರಾಜಿನಲ್ಲಿ ಉದ್ಭವವಾಗುವ ಯಾವುದೇ ವಿವಾದಗಳಿಗೆ ಅಧೀಕ್ಷಕ ಅಭಿಯಂತರು, ಶಿವಮೊಗ್ಗ ವೃತ್ತ ಶಿವಮೊಗ್ಗ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ ಹಾಗೂ ಈ ತೀರ್ಪಿನ ಮೇಲೆ ಯಾವುದೇ ಮೇಲ್ಮನವಿಯನ್ನು ಮಾನ್ಯ ಮಾಡುವುದಿಲ್ಲ.
14. ಕಾರ್ಯಪಾಲಕ ಅಭಿಯಂತರು, ಲೋ.ಇ. ಶಿವಮೊಗ್ಗ ವಿಭಾಗ ಶಿವಮೊಗ್ಗ ಇವರು ಟೆಂಡರ್ ಕಂ ಬಹಿರಂಗ ಹರಾಜನ್ನು ಯಾವುದೇ ಕಾರಣ ನೀಡದೇ ಮುಂದೂಡಲು ಅಥವಾ ನಿಲ್ಲಿಸಲು ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.
15. ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಬಾಲರಾಜ್ ಅರಸು ರಸ್ತೆ, ಶಿವಮೊಗ್ಗ ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

ಕಾರ್ಯಪಾಲಕ ಅಭಿಯಂತರು,
ಪಿ.ಆರ್. 515 ಲೋಕೋಪಯೋಗಿ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಅರಣ್ಯ ಇಲಾಖೆ
## ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, (ಸಂಶೋಧನೆ), ಅರೆಕರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ–ಬೆಂಗಳೂರು–560 076
## ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ
## ಸಂಖ್ಯೆ: ಎ2–ಬಿಯುಡಿ–ಸಿಆರ್–3/ 2007–08, ದಿನಾಂಕ:16ನೇ ಆಗಸ್ಟ್, 2007

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007–08ನೇ ಸಾಲಿಗೆ ಅರಣ್ಯ ಸಂರಕ್ಷಣಾಧಿಕಾರಿಗಳು, (ಸಂಶೋಧನೆ), ಬೆಂಗಳೂರು ವೃತ್ತದ ವ್ಯಾಪ್ತಿಗೊಳಪಟ್ಟಿರುವ ವಲಯಗಳಲ್ಲಿ ಶೆಡ್ಯೂಲ್‌ನಲ್ಲಿ ತೋರಿಸಿರುವ ಕಾಲಬದ್ಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು 2007–08ನೇ ಸಾಲಿಗೆ ಈ ವೃತ್ತದಲ್ಲಿ ನೋಂದಾಯಿಸಿರುವ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗಳಿಗೆ ಪ್ರತ್ಯೇಕ ಟೆಂಡರ್ ಕರೆಯಲಾಗಿದೆ.

ದಿನಾಂಕ: 28.09.2007 ರಂದು 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು. ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 4.00 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ:05.10.2007 ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು 4.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ಹೊರಡಿಸುವುದಿಲ್ಲ.

**ಶೆಡ್ಯೂಲ್**

| Sl. No. | Research Range | Particulars | Physical in Ha | Unit/ Cost/ ha | Total Amount | EMD Amount | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | **Advanced works (Including raising of Grafted Seedlings):** | | | | | | |
| 1. | **Clonal Orchards** | | | | | | |
| | Mandya | Mallimgere | 15 | 24200 | 363000.00 | 9100 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| | Hoskote | Nallal/ Gottipura | 10 | 24200 | 242000.00 | 6100 | |
| | Kolar | K.S. Gida | 10 | 24200 | 242000.00 | 6100 | |
| | Bangalore | J.B. Kaval/ Sulikere | 8 | 24200 | 193600.00 | 5000 | |
| | **Total** | | **43** | | | | |
| 2. | **Seedling seed Orchards** | | | | | | |
| | Mandya | C.M. Gudda | 20 | 17250 | 345000.00 | 8650 | |
| | Hoskote | Nallal/ Gottipura | 15 | 17250 | 258750.00 | 6500 | |
| | Kolar | Hadigere/ K.S. Gida | 10 | 17250 | 172500.00 | 4350 | |
| | Bangalore | J.B. Kaval/ Sulikere | 10 | 17250 | 172500.00 | 4350 | |
| 3. | **Vegetative Multiplication Garden/ CMA** | | | | | | |
| | Mandya | Mallimgere/ Mudugere | 5/Ha Euc | 26675 | 133375.00 | 3400 | |
| | | | 5/Ha Non Euc | 24200 | 121000.00 | 3100 | |
| | Tumkur | Ankapura | 1/Ha Euc | 26675 | 26675.00 | 700 | |
| | | | 1/Ha Non Euc | 24200 | 24200.00 | 610 | |
| | Bangalore | J.B. Kaval | 2.5/Ha Euc | 26675 | 66688.00 | 1700 | |
| | | | 2.25/ha Non Euc | 24200 | 60500.00 | 1550 | |
| | Hoskote | Nallal/ Gottpura | 5/Ha Euc | 26675 | 133375.00 | 3400 | |
| | | | 5/Ha Non Euc | 24200 | 121000.00 | 3100 | |
| | Kolar | Yeshwanthpura-B | 1.5/ Ha Euc | 26675 | 40013.00 | 1000 | |
| | | | 1.5/Ha Non Euc | 24200 | 36300.00 | 910 | |
| | | | 30 | | | | |
| 4. | **Pregeny Trial Plot** | | | | | | |
| | Mandya | D.M Gudda | 10 | 19030 | 190300.00 | 4800 | |
| | Hoskote | Nallal/ Gottipura | 10 | 19030 | 190300.00 | 4800 | |
| | Kolar | Hadigere/ K.S. Gida | 3 | 19030 | 57090.00 | 1450 | |
| | Bangalore | Sulikere/ Kalkere | 5 | 19030 | 95150.00 | 2400 | |
| | Tumkur | Ankapura | 2 | 19030 | 38060.00 | 960 | |
| | | | 30 | | | | |
| 5. | **Identification of Plus Trees:** | | | | | | |
| | Bangalore | - | 40 nos | 2750/ tree | 110000.00 | 2750 | |
| | Tumkur | - | 40 nos | 2750/ tree | 110000.00 | 2750 | |
| | Mandya | - | 40 nos | 2750/ tree | 110000.00 | 2750 | |
| | Kolar | - | 40 nos | 2750/ tree | 110000.00 | 2750 | |
| | Hoskote | - | 40 nos | 2750/ tree | 110000.00 | 2750 | |
| | | | 200 nos | | | | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 6. | **Seed Production Area (Non-Teak)** | | | | | | |
| | Bangalore | - | 40 | 10450 | 418000.00 | 10500 | |
| | Mandya | - | 50 | 10450 | 522500.00 | 10500 | |
| | Kolar | - | 10 | 10450 | 104500.00 | 2700 | |
| | Hoskote | - | 40 | 10450 | 418000.00 | 10500 | |
| | | | 140 | | | | |

ಟೆಂಡರ್ ನಮೂನೆಯನ್ನು ದಿನಾಂಕ:28.09.2007 ಮತ್ತು 05.10.2007 ರಂದು 1.00 ಗಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ.200.00 (ತೆರಿಗೆ ಪ್ರತ್ಯೇಕ) ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಶೆಡ್ಯೂಲ್ ಕಾಲಂ ಸಂಖ್ಯೆ: 7 ರಲ್ಲಿರುವಂತೆ ಪ್ರತ್ಯೇಕವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಟೆಂಡರ್ ನಡೆಯಬಹುದಾದ ಸಂದರ್ಭದಲ್ಲಿ ಟೆಂಡರ್ ನಮೂನೆಗಳನ್ನು ಆಯಾ ದಿನಾಂಕದಂದು 1.00 ಗಂಟೆಯವರೆಗೆ ಪಡೆಯಬಹುದಾಗಿದೆ.

## ನಿಬಂಧನೆಗಳು

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ.200.00 (ತೆರಿಗೆ ಪ್ರತ್ಯೇಕ) ಪಾವತಿ ಮಾಡಿ ದಿನಾಂಕ:28.09.2007 ಮತ್ತು 05.10.2007 ಕಛೇರಿ ಕೆಲಸದ ವೇಳೆಯಲ್ಲಿ 1.00 ಗಂಟೆಯವರೆಗೆ ಪಡೆಯತಕ್ಕದ್ದು. ಮತ್ತು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2007–08ನೇ ಸಾಲಿಗೆ ತಮ್ಮ ಹೆಸರನ್ನು ನೋಂದಾಯಿಸಿಕೊಂಡಿರಬೇಕು.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ:28.09.2007 ರಂದು ಸಂಜೆ 3.00 ಗಂಟೆಯವರೆಗೆ ಅರಣ್ಯ ಸಂರಕ್ಷಣಾಧಿಕಾರಿಗಳು, (ಸಂಶೋಧನೆ), ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ:05.10.2007ರ ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಈ ಎಲ್ಲಾ ಕೆಲಸಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯಾಧಿಕಾರಿಗಳ ನಿರ್ದೇಶನ ಮತ್ತು ಮೇಲಾಧಿಕಾರಿಗಳ ನಿರ್ದೇಶನದಂತೆಯೂ ಜಾರಿಗೊಳಿಸಲು ಬದ್ಧರಾಗಿರಬೇಕು. ಮೇಲಿನ ಕೆಲಸಗಳು ಕಾಲಬದ್ಧವಾಗಿದ್ದು, ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ ಬದಲಾವಣೆಯಾದರೂ ಸಹ ಕೆಲಸಗಳನ್ನು ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ. ಇನ್ನೂ ಹೆಚ್ಚಿನ ಕಾಮಗಾರಿಗಳನ್ನು ತಿಳಿಸಿ ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ನಿರ್ವಹಿಸಬೇಕಾಗಿರುತ್ತದೆ.
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಯನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವತಂತ್ರವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇ.ಎಂ.ಡಿ. ಮೊತ್ತಕ್ಕೆ ಅರಣ್ಯ ಸಂರಕ್ಷಣಾಧಿಕಾರಿಗಳು, (ಸಂಶೋಧನೆ), ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿ.ಡಿ. ರೂಪದಲ್ಲಿ ಪಡೆದು ಪಾವತಿಸಬೇಕಾಗಿರುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, (ಸಂಶೋಧನೆ), ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವುದಿಲ್ಲ.
9. ಯಾವುದೇ ಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಉಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, (ಸಂಶೋಧನೆ), ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.

10. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳಿಸುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣಕ್ಕೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ಸಹಾಯಕ ಅರಣ್ಯ ಕೃಷಿಕರುಗಳಿಂದ ತನಿಖೆ ಮಾಡಿಸಿ, ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಟಿಪ್ಪಣಿ ಪುಸ್ತಕದೊಂದಿಗೆ (ಎಫ್.ಎನ್.ಬಿ.: ಎಂ.ಬಿ.) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಹಣ ಸಂದಾಯ ಮಾಡುವಾಗ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಕಡಿತಗೊಳಿಸಲಾಗುವುದು. ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸವಾದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
12. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು/ ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ, ಮರಗಳನ್ನು ಕಡಿದು ನಾಶಪಡಿಸಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು/ ಬಿಲ್ಲುಗಳಲ್ಲಿ ಕಟಾವು ಮಾಡಲಾಗುವುದು ಮತ್ತು ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
13. ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು "ಕರ್ನಾಟಕ ಸಾರ್ವಜನಿಕ ಸಂಗ್ರಹಣದಲ್ಲಿ ಪಾರದರ್ಶಕತೆ ಕಾಯ್ದೆ 1999 ಕಾಲಂ 27 (1) (ಎ) ದಂತೆ ಮೇಲೆ ನಮೂದಿಸಿದ ರೀತಿಯ ಕೆಲಸಗಳನ್ನು ಕರ್ನಾಟಕ ಅರಣ್ಯ ಇಲಾಖೆಯ ಯಾವುದೇ ವಿಭಾಗದಲ್ಲಿ ಕನಿಷ್ಠ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು. ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಒದಗಿಸಬೇಕು.
14. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
15. ಈ ಮೇಲಿನ ಕಾಮಗಾರಿಗಳು ಅನುದಾನ ಲಭ್ಯತೆಯ ಮೇಲೆ ಕೈಗೊಳ್ಳಬೇಕಾಗಿರುತ್ತದೆ. ಒಂದು ವೇಳೆ ಸರ್ಕಾರದಿಂದ ಅನುದಾನ ಬಿಡುಗಡೆಯಾಗುವುದು ತಡವಾದಲ್ಲಿ, ಇಲಾಖೆಯಿಂದ ಯಾವುದೇ ಬಡ್ಡಿಯನ್ನು ನೀಡಲಾಗುವುದಿಲ್ಲ.
16. ಯಶಸ್ವಿ ಟೆಂಡರ್‌ದಾರರು, ಟೆಂಡರ್ ಆದ ಕಾಮಗಾರಿಗಳನ್ನು ಕರಾರು ಪತ್ರ ಮಾಡಿಕೊಂಡ ದಿನಾಂಕದಿಂದ ಮೂರು ತಿಂಗಳೊಳಗೆ (3) ಕಾಮಗಾರಿಗಳನ್ನು ಮುಗಿಸಬೇಕಾಗಿರುತ್ತದೆ.

ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 527 (ಸಂಶೋಧನೆ), ಬೆಂಗಳೂರು.

## ಜಲ ಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ

ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಹಳಿಯಾಳ (ಉ.ಕ. ಜಿಲ್ಲೆ ಅಂ/ ಅನೀವಿಹ/ ತಾವಿ/ ಟೆಂಡರ್/ 07–08/ 2427

## ಟೆಂಡರ್ ದಿನಾಂಕ:ಮುಂದೂಡಿಕೆ ಪ್ರಕಟಣೆ

**ವಿಷಯ:** ಉತ್ತರ ಕನ್ನಡ ಜಿಲ್ಲೆ ಕುಮಟಾ ತಾ: ಶಿರಗುಂಜಿ ಏತ ನೀರಾವರಿ ಯೋಜನೆ (ಸಿವಿಲ್ ಮಶಿನರಿ ಹಾಗೂ ಎಲೆಕ್ಟ್ರಿಕಲ್ ಕಾಮಗಾರಿ)

**ಉಲ್ಲೇಖ:** (1) ಈ ಕಛೇರಿ ಪ.ಸಂ./ ಸನೀವಿಹ/ ತಾವಿ/ ಟೆಂಡರ/ 07–08, 1923 ದಿನಾಂಕ:05.06.2007.

(2) ಈ ಕಛೇರಿ ಪ.ಸಂ./ ಸನೀವಿಹ/ ತಾವಿ/ ಟೆಂಡರ್/ 07–08/ 2390, ದಿನಾಂಕ:18.07.2007.

ಉಲ್ಲೇಖ (1)ರಲ್ಲಿ ಮೇಲ್ಕಾಣಿಸಿದ ಕಾಮಗಾರಿ 2ನೇ ಕರೆ ಕರೆದಿದ್ದು, ಉಲ್ಲೇಖ (2)ರಲ್ಲಿ ಟೆಂಡರ್ ದಿನಾಂಕವನ್ನು ವಿಸ್ತರಿಸಲಾಗಿರುತ್ತದೆ. ಸಧ್ಯಕ್ಕೆ ಈ ಕಾಮಗಾರಿಯ ಟೆಂಡರ್ ದಿನಾಂಕಗಳನ್ನು ಅನಿರ್ದಿಷ್ಟವಾಗಿ ಮುಂದಿನ ಆದೇಶದವರೆಗೆ ಮುಂದೂಡಲಾಗಿರುತ್ತದೆ.

ಇನ್ನುಳಿಂದಂತೆ ಯಾವುದೇ ಷರತ್ತುಗಳಲ್ಲಿ ಬದಲಾವಣೆ ಇದ್ದಿರುವುದಿಲ್ಲ.

ಕಾರ್ಯನಿರ್ವಾಹಕ ಅಭಿಯಂತರರು
ಪಿ.ಆರ್. 513 ಸಣ್ಣ ನೀರಾವರಿ ವಿಭಾಗ, ಹಳಿಯಾಳ (ಉ.ಕ.)

## ಪೊಲೀಸ್ ಅಧೀಕ್ಷಕರವರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

### ಬಹಿರಂಗ ಹರಾಜು ಪ್ರಕಟಣೆ

### ನಂ.ಲೆಕ್ಕ (5) 40/ 2007–08, ದಿನಾಂಕ:6ನೇ ಆಗಸ್ಟ್, 2007

ವಿಷಯ: ಚಿಕ್ಕಮಗಳೂರು ಜಿಲ್ಲೆಯ ಪೊಲೀಸ್ ವಾಹನಗಳಿಂದ ಶೇಖರಿಸಲ್ಪಟ್ಟ 2006–07ನೇ ಸಾಲಿನ ಮೋಟಾರು ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟೈಯರ್, ಟ್ಯೂಬ್‌ನ್ನು ದಿನಾಂಕ:10.09.2007ರಂದು ಬಹಿರಂಗ ಹರಾಜು ಮಾಡುವ ಕುರಿತು.

ಉಲ್ಲೇಖ: (1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ/ 198/ ಇಎಂವಿ/ 2000, ದಿನಾಂಕ:19.06.2003.

(2) ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ರವರ ಪತ್ರ ನಂ.ವಾಸ (3) 1/ 97–98, ವಾಲ್ಯೂಂ–111 ದಿನಾಂಕ:05.06.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿಕ್ಕಮಗಳೂರು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ರಾಮನಹಳ್ಳಿ, ಚಿಕ್ಕಮಗಳೂರಿನಲ್ಲಿ ಸಂಗ್ರಹಿಸಲಾಗಿದ್ದ ಯಥಾ ಸ್ಥಿತಿಯಲ್ಲಿರುವ ಈ ಕೆಳಕಂಡ ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟೈಯರ್, ಟ್ಯೂಬನ್ನು ಬಹಿರಂಗ ಹರಾಜು ಪ್ರಕಟಣೆ (ಟೆಂಡರ್ ಕಂ ಆಕ್ಷನ್ ಸೇಲ್) ಮೂಲಕ ಚಿಕ್ಕಮಗಳೂರು ಜಿಲ್ಲೆಯ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ದಿನಾಂಕ:10.09.2007 ರಂದು ಬೆಳಿಗ್ಗೆ 10.00 ಗಂಟೆಗೆ ವಿಲೇವಾರಿ ಮಾಡಲಾಗುವುದು. ಆಸಕ್ತಿವುಳ್ಳವರು ಭಾಗವಹಿಸಬಹುದು. ನಿರುಪಯುಕ್ತ ವಾಹನಗಳ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಿವರಣೆ | ಅನುಪಯುಕ್ತ ವಸ್ತುಗಳು |
|---|---|---|
| 1 | 2 | 3 |
| 1. | ನಿರುಪಯುಕ್ತ ಬಿಡಿಭಾಗಗಳು | ಕ್ರಮ ಸಂಖ್ಯೆ 1 ರಿಂದ 727 |
| 2. | ಟೈರು ಮತ್ತು ಟ್ಯೂಬ್ | 108 ಟೈರು 108 ಟ್ಯೂಬ್ |

**ಹರಾಜಿನ ಷರತ್ತುಗಳು:**

1. ನಿರುಪಯುಕ್ತ ಬಿಡಿಭಾಗಗಳು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣ, ರಾಮನಹಳ್ಳಿ, ಚಿಕ್ಕಮಗಳೂರಿನಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ರೂ.1,000–00 (ಒಂದು ಸಾವಿರ ರೂಪಾಯಿ) ಠೇವಣಿ ಹಣವನ್ನು ಹರಾಜಿನ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಈ ನಿರುಪಯುಕ್ತ ವಸ್ತುಗಳ ಖರೀದಿಗೆ ಟೆಂಡರ್ ಸಲ್ಲಿಸಬಯಸುವ ಆಸಕ್ತ ಸಾರ್ವಜನಿಕರು ರೂ.1,000/– (ಒಂದು ಸಾವಿರ ರೂಪಾಯಿಗಳು) ಗಳ ಠೇವಣಿ ಹಣವನ್ನು "ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ" ಇವರ ನಗದು ಶಾಖೆಯಲ್ಲಿ ನಗದು ತುಂಬಿ ನಿರುಪಯುಕ್ತ ವಾಹನ ಟೈರು, ಟ್ಯೂಬ್, ಬಿಡಿಭಾಗಗಳ ಖರೀದಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿದ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ:05.09.2007ರ ಸಂಜೆ 4.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. (ಟೆಂಡರ್ ಫಾರಂ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ).
4. ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದು.
5. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಚಿಕ್ಕಮಗಳೂರು ಜಿಲ್ಲೆ ರವರಿಗಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಗಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ತೆರೆದು ಬಹಿರಂಗ ಪಡಿಸುವುದು. ಹರಾಜಿನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಅಥವಾ ಟೆಂಡರ್‌ನಲ್ಲಿ ದಾಖಲಾದ ಅತಿ ಹೆಚ್ಚಿನ ಬೆಲೆ ಇವೆರೆಡರಲ್ಲಿ ಅತಿ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರೆಂದು ಪರಿಗಣಿಸಲಾಗುವುದು.
6. ಯಶಸ್ವಿಯಾದ ಟೆಂಡರ್/ ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡಾ 25ರಷ್ಟು (ಠೇವಣಿ ಬಿಟ್ಟು) ಹಣವನ್ನು ಹರಾಜಿನ ಸ್ಥಳದಲ್ಲಿ ಅದೇ ದಿನವೇ ತುಂಬ ತಕ್ಕದ್ದು. ಈ ಹಣಕ್ಕೆ ಯಾವುದೇ ಬಿಡ್ಡಿಯನ್ನು ನೀಡಲಾಗದು. ಮೇಲಾಧಿಕಾರಿಯವರ ವಿಲೇವಾರಿ ಒಪ್ಪಿಗೆ ಬಂದ ನಂತರವೇ ಉಳಿದ ಭಾಗವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ಬಿಡಿಭಾಗಗಳನ್ನು ವಹಿಸಿಕೊಡಲಾಗುವುದು.

ಈ ಬಿಡಿಭಾಗಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು, ತಪ್ಪಿದ್ದಲ್ಲಿ ಅವರು ತುಂಬಿದ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ವಾಹನಗಳನ್ನು ಹರಾಜು ಮಾಡಲಾಗುವುದು.

7. ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರ ಕಛೇರಿ, ಚಿಕ್ಕಮಗಳೂರು ನಗದು ಶಾಖೆಯಲ್ಲಿ ನಗದಾಗಿ ತುಂಬುವುದು ನಿರುಪಯುಕ್ತ ಬಿಡಿಭಾಗಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.
8. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
9. ಹರಾಜಿನಲ್ಲಿ ಯಾವುದೇ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಹೊಂದಿರುತ್ತಾರೆ ಹಾಗೂ ಅವರ ತೀರ್ಮಾನವೇ ಅಂತಿಮವಾದದ್ದು.
10. ಬಹಿರಂಗ ಹರಾಜಿನ ವಿಷಯದಲ್ಲಿ ಯಾವುದೇ ವಾದವಿವಾದ ಉಂಟಾದಲ್ಲಿ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ರವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.
11. ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿಯನ್ನು ಹರಾಜು ಮುಗಿದ ನಂತರ ತಕ್ಷಣ ಅವರಿಗೆ ಹಿಂದಿರುಗಿಸಲಾಗುವುದು.
12. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ನಿರುಪಯುಕ್ತ ವಸ್ತುಗಳನ್ನು ಕಛೇರಿಯ ವೇಳೆಯಲ್ಲಿ ಡಿ.ಎ.ಆರ್., ರಾಮನಹಳ್ಳಿ, ಚಿಕ್ಕಮಗಳೂರು ಇಲ್ಲಿ ವೀಕ್ಷಿಸಬಹುದು.
13. ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

" ಟೆಂಡರ್ ಫಾರಂನ ನಮೂನೆ"

ಪೊಲೀಸ್ ವಾಹನಗಳ ನಿರುಪಯುಕ್ತ ಬಿಡಿಭಾಗಗಳು, ಟೈರು, ಟ್ಯೂಬ್ ಟೆಂಡರ್

ಗೆ,

ಪೊಲೀಸ್ ಅಧೀಕ್ಷಕರು, ಚಿಕ್ಕಮಗಳುರು ಜಿಲ್ಲೆ, ಚಿಕ್ಕಮಗಳೂರು.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ ನಂ. ಲೆಕ್ಕ (5) 40/ 2007-08, ದಿನಾಂಕ: /08/ 2007 ರಲ್ಲಿ ತಿಳಿಸಿರುವ 2006-07ನೇ ಸಾಲಿನ ನಿರುಪಯುಕ್ತವಾದ ಬಿಡಿಭಾಗಗಳು: ಟೈರು, ಟ್ಯೂಬ್, ರೂ. ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ದಿನಾಂಕ: ತಮ್ಮ ವಿಶ್ವಾಸಿ,

ಸ್ಥಳ: (ಬಿಡ್‌ದಾರರ ಸಹಿ ಮತ್ತು ವಿಳಾಸ)

ಪೊಲೀಸ್ ಅಧೀಕ್ಷಕರು,

ಪಿ.ಆರ್. 523 ಚಿಕ್ಕಮಗಳೂರು ಜಿಲ್ಲೆ.

**ತುಮಕೂರು ಅರಣ್ಯ ವಿಭಾಗದ ವಿವಿಧ ಅರಣ್ಯ ವಲಯ ವ್ಯಾಪ್ತಿಗೆ ಒಳಪಡುವ ವಿವಿಧ ಅರಣ್ಯ ಉತ್ಪನ್ನಗಳ ಎತ್ತುವಳಿ ಗುತ್ತಿಗೆ ಬಗ್ಗೆ 2007-09ನೇ ಸಾಲಿನ ಮರು ಟೆಂಡರ್-ಕಂ-ಹರಾಜು ಪ್ರಕಟಣೆ**

**ಸಂಖ್ಯೆ: ಎ8: ಸೇಲ್ಸ್: ಟೆಂಡರು-ಕಂ-ಹರಾಜು-1/ 2007-08, ದಿನಾಂಕ:27ನೇ ಜುಲೈ, 2007**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2007-09ರ ಸಾಲಿಗೆ (01.07.2007 ರಿಂದ 30.06.2009 ರವರೆಗೆ) ತುಮಕೂರು ಅರಣ್ಯ ವಿಭಾಗದಲ್ಲಿ ಮೆ: ಕೆಎಫ್‌ಡಿಸಿ, ಬೆಂಗಳೂರುರವರಿಗೆ ಹಸ್ತಾಂತರಿಸಿರುವ ಅರಣ್ಯ ಪ್ರದೇಶ ಮತ್ತು ಗ್ರಾಮ ಅರಣ್ಯ ಸಮಿತಿಗಳಿಗೆ ಸೇರ್ಪಡೆಯಾಗಿರುವ ಅರಣ್ಯ ಪ್ರದೇಶಗಳನ್ನು ಹೊರತುಪಡಿಸಿ ಅರಣ್ಯೋತ್ಪನ್ನಗಳಾದ ಹುಣಸೆ, ಮರಡಿಬೀಜ, ತೂಪ್ರಎಲೆ, ಮತ್ತು ಕಿರು ಅರಣ್ಯ ಉತ್ಪನ್ನಗಳ ಎತ್ತುವಳಿ ಗುತ್ತಿಗೆಯನ್ನು ಒಪ್ಪಂದವಾದ ದಿನಾಂಕದಿಂದ 30.06.2009ರವರೆಗೆ ರೂಢಿಸಿಕೊಳ್ಳುವ ಷರತ್ತಿಗೊಳಪಟ್ಟು ನಡೆಸುವ ಮರು ಟೆಂಡರು-ಕಂ-ಹರಾಜನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರಾಗಲೀ ಅಥವಾ ಈ ಸಂಬಂಧವಾಗಿ ಅಧಿಕಾರ ಪಡೆದ ಇತರೆ ಅಧಿಕಾರಿಯಿಂದಾಗಲೀ ಈ ಕೆಳಗೆ ನಮೂದಿಸಿದ ದಿನಾಂಕ ಹಾಗೂ ಸಮಯದಂದು ಸಂಪೂರ್ಣ ಹರಾಜು ಇಸ್ತಿಹಾರಿನ ಷರತ್ತುಗಳಿಗನುಸಾರವಾಗಿ ಏರ್ಪಡಿಸಲಾಗಿದೆ.

| ಕ್ರ.ಸಂ. | ಅರಣ್ಯೋತ್ಪನ್ನಗಳ ಹೆಸರು | ಹರಾಜಿನ ದಿನಾಂಕ | ಮರು ಹರಾಜಿನ ದಿನಾಂಕ (ಷರತ್ತು ಸಂಖ್ಯೆ 12ರಂತೆ) |
|---|---|---|---|
| 1. | ಕಿರು ಅರಣ್ಯ ಉತ್ಪನ್ನ | 29.08.2007 | 04.09.2007 |
| 2. | ಹುಣಸೆ ಫಸಲು | 29.08.2007 | 04.09.2007 |
| 3. | ಮರಡಿಬೀಜ | 29.08.2007 | 04.09.2007 |
| 4. | ತೂಪ್ರಎಲೆ | 29.08.2007 | 04.09.2007 |

ವಿವರ

| | | |
|---|---|---|
| 1) | ಟೆಂಡರ್ ಅರ್ಜಿ ಮಾರಾಟ | ಆಯಾ ಫಸಲಿನ ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆವರೆಗೆ |
| 2) | ಟೆಂಡರ್ ಅರ್ಜಿಯನ್ನು ಬಾಕ್ಸ್ ಒಳಗಡೆ ಹಾಕುವ ಸಮಯ | ಆಯಾ ಫಸಲಿನ ಹರಾಜಿನ ದಿನಾಂಕದಂದು ಮಧ್ಯಾಹ್ನ 3.00 ಗಂಟೆಯವರೆಗೆ |
| 3) | ಹರಾಜು ಮಾಡುವ ಹಾಗೂ ಟೆಂಡರ್‌ನ್ನು ತೆಗೆಯುವ ದಿನಾಂಕ/ಸಮಯ | ಆಯಾ ಫಸಲಿನ ಹರಾಜಿನ ದಿನಾಂಕದಂದು ಮಧ್ಯಾಹ್ನ 4.00 ಗಂಟೆಗೆ ಹರಾಜು ನಡೆದ ನಂತರ ಟೆಂಡರ್ ಬಾಕ್ಸ್ ತೆರೆಯಲಾಗುವುದು. |

ಟೆಂಡರ್–ಕಂ–ಹರಾಜಿಗೆ ಒಳಪಡುವ ವಲಯಗಳ ಹೆಸರು

| | | |
|---|---|---|
| 1) | ಕಿರು ಅರಣ್ಯ ಉತ್ಪನ್ನಗಳು | ತಿಪಟೂರು, ಚಿಕ್ಕನಾಯಕನಹಳ್ಳಿ, ಗುಬ್ಬಿ, ಸಿರಾ, ಪಾವಗಡ ಹಾಗೂ ಬುಕ್ಕಾಪಟ್ಟಣ ವಲಯ ವ್ಯಾಪ್ತಿ. |
| 2) | ಹುಣಸೆ ಫಸಲು | ಕುಣಿಗಲ್, ಮಧುಗಿರಿ, ಕೊರಟಗೆರೆ, ಸಿರಾ, ತಿಪಟೂರು, ಬುಕ್ಕಾಪಟ್ಟಣ ಹಾಗೂ ಚಿಕ್ಕನಾಯಕನಹಳ್ಳಿ ವಲಯ, ವ್ಯಾಪ್ತಿ |
| 3) | ಮರಡಿಬೀಜ | ಶಿರಾ ಹಾಗೂ ಗುಬ್ಬಿ ತಾಲ್ಲೂಕುಗಳು |
| 4) | ತೂಪ್ರಎಲೆ | ವಿಭಾಗದ ಎಲ್ಲಾ ತಾಲ್ಲೂಕುಗಳು |

ಷರತ್ತುಗಳು

1. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗರವರ ಹೆಸರಿಗೆ ರೂ.1000–00 ಮೊಬಲಗಿಗೆ ಡಿ.ಡಿ.ಯನ್ನು ಯಾವುದೇ ಅಧಿಕೃತ ಬ್ಯಾಂಕ್‌ನಿಂದ ಪಡೆದು ಸಲ್ಲಿಸುವುದು. ಪ್ರತೀ ತಾಲ್ಲೂಕು ಹಾಗೂ ಪ್ರತೀ ಅರಣ್ಯ ಉತ್ಪನ್ನಕ್ಕೆ ಪ್ರತ್ಯೇಕವಾದ ಡಿ.ಡಿ.ಯನ್ನು ಸಲ್ಲಿಸುವುದು.
2. ಟೆಂಡರ್ ಹಾಗೂ ಹರಾಜನ್ನು ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ.
3. ಹರಾಜು ನಡೆಸುವ ಅಧಿಕಾರಿಗಳು ಇಚ್ಛಿಸುವ ರೀತಿಯಲ್ಲಿ ಅಗತ್ಯಬಿದ್ದಲ್ಲಿ ಯೂನಿಟ್‌ವಾರು ಅಥವಾ ಎಲ್ಲಾ ಯೂನಿಟ್‌ಗಳನ್ನು ಸೇರಿಸಿ ಒಟ್ಟಾಗಿ ಹರಾಜು ಮಾಡುವ ಅಧಿಕಾರವನ್ನು ಪಡೆದಿರುತ್ತಾರೆ.
4. ಸಾಧಾರಣವಾಗಿ ಒಂದಕ್ಕಿಂತ ಹೆಚ್ಚಾಗಿ ಟೆಂಡರ್‌ಗಳನ್ನು ಯಾವುದೇ ಗುತ್ತಿಗೆದಾರರು ಹಾಕುವಂತಿಲ್ಲ. ಒಂದು ವೇಳೆ ಹಾಕಿದ್ದಲ್ಲಿ ಅತಿ ಹೆಚ್ಚಿನ ಟೆಂಡರ್ ಮೊಬಲಗನ್ನು ಪರಿಗಣಿಸಿ ಉಳಿದವುಗಳನ್ನು ತಿರಸ್ಕರಿಸಲಾಗುವುದು.
5. ಸೀಲಾದ ಲಕೋಟೆಯ ಮೇಲೆ 2007–09ನೇ ಸಾಲಿಗೆ ತುಮಕೂರು ಅರಣ್ಯ ವಿಭಾಗದಲ್ಲಿ ಅರಣ್ಯ ಉತ್ಪನ್ನಗಳನ್ನು ರೂಢಿಸುವ ಬಾಬಿನ ಟೆಂಡರ್ ಎಂಬುದಾಗಿ ನಮೂದಿಸತಕ್ಕದ್ದು, ಹಾಗೂ ಯಾವ ಅರಣ್ಯ ಉತ್ಪನ್ನಕ್ಕೆ ಸಂಬಂಧಿಸಿದ ಟೆಂಡರು ಎಂಬುದಾಗಿ ಪ್ರತ್ಯೇಕವಾಗಿ ಬರೆಯಬೇಕು.
6. ಹರಾಜು ಅಥವಾ ಟೆಂಡರ್ ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜಿನ ಪೂರ್ಣ ಮೊತ್ತ ಹಾಗೂ ಪೂರ್ಣ ತೆರಿಗೆಗಳನ್ನು ಸ್ಥಳದಲ್ಲಿಯೇ ಪಾವತಿಸುವುದು. ತಪ್ಪಿದಲ್ಲಿ ಇಎಂಡಿಯನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು. ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಮೂಲ ಬಿಡ್ಡುದಾರರು ಜವಾಬ್ದಾರರಾಗಿರುತ್ತಾರೆ.
7. ಈ ವಿಭಾಗದ ನೊಂದಾಯಿತ ಗುತ್ತಿಗೆದಾರರು ಮಾತ್ರ ಟೆಂಡರ್ ಹಾಕಲು ಅರ್ಹರಾಗಿರುತ್ತಾರೆ. ಹರಾಜಿನಲ್ಲಿ ಭಾಗವಹಿಸುವವರು ರೂಪಾಯಿ 1000/– ಮೊಬಲಗನ್ನು ಮುಂಗಡವಾಗಿ ಪಾವತಿಸಿ ಪಾಲ್ಗೊಳ್ಳುವುದು.
8. ಈ ಹಿಂದೆ ಅನರ್ಹರಾಗಿರುವ ಅರಣ್ಯ ಗುತ್ತಿಗೆದಾರರು ಅಥವಾ ದಿವಾಳಿಯಾಗಿರುವ ಅರಣ್ಯ ಗುತ್ತಿಗೆದಾರರು ಭಾಗವಹಿಸಲು ಅರ್ಹರಲ್ಲ.
9. ಹರಾಜಿನಲ್ಲಿ ತೆರಿಗೆಗಳ ಬಾಬ್ತು ರಿಯಾಯಿತಿ ಕೋರುವವರು ಸಂಬಂಧಿಸಿದ ಪ್ರಾಧಿಕಾರದಿಂದ ದೃಢೀಕರಣ ಪತ್ರ ಪಡೆದು ಹರಾಜಿನ ದಿನದಂದು ಹಾಜರುಪಡಿಸುವುದು.
10. ಯಶಸ್ವಿ ಬಿಡ್ಡುದಾರರು ಹರಾಜಿನ ದಿನಾಂಕದಂದು ಹರಾಜಿನ ಪೂರ್ಣ ಮೊತ್ತವನ್ನು ಪಾವತಿಸಿ ಕರಾರು ಪತ್ರ ಬರೆದುಕೊಟ್ಟು ಕಾರ್ಯಾದೇಶ ಪಡೆದ ನಂತರ ಅರಣ್ಯ ಉತ್ಪನ್ನ ಎತ್ತುವಳಿ ಮಾಡುವುದು, ತಪ್ಪಿದಲ್ಲಿ ನಿಯಮಾನುಸಾರ ಸೂಕ್ತಕ್ರಮ ತೆಗೆದುಕೊಳ್ಳಲಾಗುವುದು.
11. ಹೆಚ್ಚಿನ ವಿಷಯಗಳನ್ನು ತುಮಕೂರು ಅರಣ್ಯ ವಿಭಾಗ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.
12. ಮರು ಟೆಂಡರ್–ಕಂ–ಹರಾಜನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಅಥವಾ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಮತ್ತೊಮ್ಮೆ ಮರು ಟೆಂಡರ್–ಕಂ–ಹರಾಜನ್ನು ಕಾಲಂ ನಂ.4ರಲ್ಲಿ ನಮೂದಿಸಿದ ದಿನಾಂಕದಂದು ನಡೆಸಲಾಗುವುದು. ಹಾಗೂ ಮರು ಟೆಂಡರ್ ಕಂ ಹರಾಜಿಗೆ ಪುನಃ ಯಾವುದೇ ರೀತಿಯ ಪ್ರಕಟಣೆ ನೀಡಲಾಗುವುದಿಲ್ಲ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

ಪಿ.ಆರ್. 487